# ಆನೆಗುಂದಿ (ಕಟಪಾಡಿ) ಗುರುಮಠ ಇತಿಹಾಸ

ಭರತಖಂಡದಲ್ಲಿಯೇ ಅತೀ ಪುರಾತನ ಯತೀ ಪರಂಪರಾಗಳಲ್ಲಿ ಒಂದಾದ ವಿಶ್ವಬ್ರಾಹ್ಮಣ ಸಮಾಜದ ಮೂಲಗುರುಗಳಾದ ,ಪರಮ ಪೂಜ್ಯನಿಯ ಜಗದ್ಗುರು ಆಧಿಕಾಳಹಸ್ತಚಾರ್ಯರು ಹರಿದ್ವಾರದಲ್ಲಿ ಆವಿರ್ಭವಿಸಿ ,ಕಾಶಿಯಲ್ಲಿ ಧರ್ಮಸಂಚಾರ ಮಾಡುತ್ತ ವಿಶ್ವಬ್ರಾಹ್ಮಣ ಸಮಾಜವನ್ನು ಅನುಗ್ರಹಿಸಿದ ವಿಚಾರವು "" ಕಾಳಹಸ್ತಿ ಪುರಾಣದಲ್ಲಿ"" ಕಂಡು ಬರುತ್ತದೆ . ಅಲ್ಲಿ ಸುವ್ರತ ಮಹಾರಾಜರಿಂದ ಜಗದ್ಗುರುಗಳಾಗಿ ಘೋಷಿಸಲ್ಪಟ್ಟ ಬಗ್ಗೆಯೂ ಇದೇ ವಿಶ್ವಕರ್ಮ ಪುರಾಣ ತಿಳಿಸುತ್ತದೆ.ಇವರಿಂದ ಸ್ಥಾಪಿತವಾದ ಶ್ರೀಮದ್ ಜಗದ್ಗುರು ಕಾಶಿ,ಮೂಲ ಆನೆಗುಂದಿ ಮಹಾಸಂಸ್ಥಾನ ಸರಸ್ವತಿ ಪೀಠ,ಧರ್ಮ ಸಂಸ್ಥಾಪನೆ ಮತ್ತು ಧರ್ಮದ ಪ್ರಸಾರಕ್ಕಾಗಿ ಭರತಖಂಡದಲ್ಲಿ ಸುದೀರ್ಘ ಯಾತ್ರೆಯನ್ನು ಮಾಡಿ ನಾಲ್ಕು ಪೀಠಗಳನ್ನು ಸ್ಥಾಪನೆ ಮಾಡಿ ,ಮುಂದೆ ಐದನೇ ಪೀಠ ಕರ್ನಾಟಕದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹಂಪಿಯ ಹತ್ತಿರ ಆನೆಗುಂದಿಯಲ್ಲಿ 2ನೆ ಶ್ರೀ ರೂಢಾಚಾರ್ಯ ಸ್ವಾಮೀಜಿಗಳಿಂದ ಸ್ಥಾಪಿಸಲ್ಪಟ್ಟಿದೆ .ಭಾರತದಲ್ಲಿ ವಿಶ್ವಬ್ರಾಹ್ಮಣ ಜನಸಂಖ್ಯೆಯು ಸರಿ-ಸುಮಾರು 15ರಿಂದ20 ಕೋಟಿ ಇರಬಹುದೆಂದು ಅಂದಾಜಿಸಲಾಗಿದೆ .ವಿಶ್ವಬ್ರಾಹ್ಮಣ ಸಮಾಜವು ವೇದಗಳ ಹಾಗು ಪುರಾಣದ ಪ್ರಕಾರ ಅನೇಕ ಇತಿಹಾಸವನ್ನು ಹೇಳುತ್ತದೆ ಅದರಲ್ಲಿ ಋಗ್ವೇದ ದಶಮ ಮಂಡಲದ,ವಿಶ್ವಕರ್ಮ ಸೂಕ್ತ ಮಂತ್ರ ದೃಷ್ಟಾರ ಭೌವನ ವಿಶ್ವಕರ್ಮಋಷಿಯ ಅನುಯಾಯಿಗಳೆಂದು ವಿಶ್ವಬ್ರಾಹ್ಮಣರ ನಂಬಿಕೆ ಯಾಗಿದೆ .

ವಿಶ್ವಬ್ರಾಹ್ಮಣರು ವೈದಿಕ ಮತ್ತು ಶಿಲ್ಪಿ ಪರಂಪರೆಯ ಪಂಚ ಕಸುಬುಗಳ ಮೂಲಕ ಗುರುತಿಸಿಕೊಂಡಿದ್ದಾರೆ.ಆಚಾರ-ವಿಚಾರ, ಸಂಪ್ರದಾಯ ,ವೇಷ ಭೂಷಣ ,ಭಾಷೆ ,ಆಹಾರ ಕ್ರಮಗಳು ಪ್ರಾದೇಶಿಕವಾಗಿ ಭಿನ್ನವಾಗಿದ್ದರು ಎಲ್ಲಾ ವಿಶ್ವಬ್ರಾಹ್ಮಣರು ತಮ್ಮನ್ನು ಮೂಲ ವಿಶ್ವಕರ್ಮ ಪರಬ್ರಹ್ಮನೊಂದಿಗೆ ಸಮೀಕರಿಸಿಕೊಳ್ಳುತ್ತಾರೆ . ಶ್ರೀ ಕಾಳಿಕಾಂಬೆಯನ್ನು ತಮ್ಮ ಕುಲದೇವತೆ ಎಂದು ನಂಬಿ ಆರಾಧಿಸಿಕೊಂಡು ಬಂದಿದ್ದಾರೆ. ಮುಖ್ಯವಾಗಿ ವೇದ ಅಧ್ಯಯನ , ವಾಸ್ತು ಶಾಸ್ತ್ರ , ಜ್ಯೋತಿಷ್ಯ ಮತ್ತು ಸಾಂಪ್ರದಾಯಕ , ಶಾಸ್ತ್ರೀಯ ಮೂರ್ತಿ ಶಿಲ್ಪಕೆತ್ತನೆಯ ಕಾರ್ಯಗಳನ್ನೂ ನಿರ್ಮಿಸುವ ಅಧಿಕಾರ ವಿಶ್ವಬ್ರಾಹ್ಮಣರಿಗೆ ಜನ್ಮ ದತ್ತವಾಗಿ ಬಂದಿರುತ್ತದೆ . ಅವರು ಪ್ರಾಮಾಣಿಕತೆಯಿಂದ ಮಾಡಿದ ಕೆಲಸ ಅಷ್ಟೇ ಕೌಶಲ್ಯಭರಿತವಾಗಿ ಹೊರಜಗತ್ತಿಗೆ ಆಕರ್ಷಣೆಯವಾಗಿ ಗೋಚರಿಸಲ್ಪಡುತ್ತದೆ .ಈ ಎಲ್ಲ ಕಾರಣಗಳಿಂದ ಅವರಿಗೆ ಪರಬ್ರಹ್ಮನಾದ ಶ್ರೀ ವಿಶ್ವಕರ್ಮನ ಪರಮ ಅನುಗ್ರಹ ಇದೆ ಎಂದು ಭಾವಿಸಿರುತ್ತಾರೆ .

ದಕ್ಷಿಣ ಭಾರತದ ಕರ್ನಾಟಕ ಅದರಲ್ಲೂ ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ,ಕಾಸರಗೋಡು ಜಿಲ್ಲೆಗಳಲ್ಲಿ ವಿಶ್ವಬ್ರಾಹ್ಮಣ ಸಮುದಾಯದವರ ಜನಸಂಖ್ಯೆ ಸುಮಾರು 5 ರಿಂದ 6 ಲಕ್ಷ ಇದೆ ಎಂದು ಕೇಳಲ್ಪಟ್ಟಿದ್ದೇವೆ. ಮುಖ್ಯವಾಗಿ ಕರಾವಳಿ ಭಾಗದಲ್ಲಿ ನೆಲೆ ನಿಂತ ಎಲ್ಲಾ ಬ್ರಾಹ್ಮಣ ವರ್ಗದವರು,ಬೇರೆ ಬೇರೆ ಪ್ರದೇಶಗಳಿಂದ ವಲಸೆ ಬಂದವರು.ಇದೇ ರೀತಿ ವಿಶ್ವಬ್ರಾಹ್ಮಣರು ಆ ನೆಲದ ಆಳರಸರ ಬೇಡಿಕೆಯಂತೆ ಆನೆಗುಂದಿ ಮತ್ತು ಕಂಚಿ ಪ್ರದೇಶದ ವಿವಿಧ ಭಾಗಗಳಿಂದ ಪ್ರಸಿದ್ಧ ದೇವಾಲಯ,ಅರಮನೆ , ಜೈನ ಬಸದಿ , ಶಿಲ್ಪಿಕಾರ್ಯಗಳ ಕೆತ್ತನೆ ಕೆಲಸಗಳಿಗೆ ಕರ್ನಾಟಕದ ಕರಾವಳಿ ಭಾಗಕ್ಕೆ ಬಂದವರು . ಮೊತ್ತ ಮೊದಲಿಗೆ ಬಾರಕೂರುರನ್ನು ತಮ್ಮ ಪ್ರಧಾನ ಕಾರ್ಯ ಕ್ಷೇತ್ರವನ್ನಾಗಿಸಿ ಕೊಂಡು , ಆ ಬಳಿಕ ಕೇರಳ, ಮಂಗಳೂರು, ಕಾರ್ಕಳ, ಮಂಜೇಶ್ವರ , ಗೋಕರ್ಣ ಪ್ರದೇಶಗಳಿಗೆ ಪಸರಿಸಿ ಹೋದರೆನ್ನಲಾಗಿದೆ. ತಾವು ಹೋಗಿ ನೆಲೆಸಿದ ಕಡೆ ಸಾಮೂಹಿಕ ಉಪಾಸನೆಗಾಗಿ ತಮ್ಮ ಕುಲದೇವರಾದ ಶ್ರೀ ಕಾಳಿಕಾಂಬೆಯ ದೇವಸ್ಥಾನವನ್ನು ನಿರ್ಮಿಸಿಕೊಂಡರು . ಕರಾವಳಿ

ಜಿಲ್ಲೆಗಳಲ್ಲಿ ಹದಿನೈದಕ್ಕಿಂತಲೂ ಹೆಚ್ಚಿನ ಕಡೆ ಪುರಾತನ ಶ್ರೀ ಕಾಳಿಕಾಂಬೆಯ ದೇವಸ್ಥಾನ ಹಾಗು ವಿಶ್ವಕರ್ಮ ದೇವಸ್ಥಾನಗಳನ್ನು ಕಾಣಬಹುದಾಗಿದೆ . ಉಡುಪಿ ಜಿಲ್ಲೆಯಲ್ಲಿಯೇ ನಾಲ್ಕು ಪ್ರಸಿದ್ಧ ಶ್ರೀ ಕಾಳಿಕಾಂಬಾ ದೇವಸ್ಥಾನಗಳು ಇವೆ .ನಾಡಿನ ಎಲ್ಲಾ ಹಾಗು ಕರಾವಳಿ ಭಾಗದ ವಿಶ್ವಬ್ರಾಹ್ಮಣ ವಂಶಸ್ಥರು ಶ್ರೀಮತ್ ಆನೆಗುಂದಿ ಸಂಸ್ಥಾನದ ಸರಸ್ವತಿ ಪೀಠ ಪರಂಪರೆಗೆ ಸೇರಿದವರಾಗಿದ್ದಾರೆ. ಅತೀ ವೈಭವ ಪೂರಿತ ವಿಜಯನಗರ ಸಾಮ್ರಾಜ್ಯದಲ್ಲಿ ಕರ್ನಾಟಕ ಶೈಲಿಯ ಸಾಂಪ್ರದಾಯಕ ಶಿಲ್ಪಕಲೆಗಳಿಗೆ ಮತ್ತು ಶಿಲ್ಪಿಗಳಿಗೆ ಅತಿಯಾದ ಬೇಡಿಕೆ ಹಾಗು ಪ್ರೋತ್ಸಹ ಇತ್ತು . ಹಿಂದೆ ಧಾರ್ಮಿಕ ಕ್ಷೇತ್ರಗಳಲ್ಲಿ ಮುಖ್ಯವಾಗಿ ದೇವಸ್ಥಾನಗಳಲ್ಲಿ ಪವಿತ್ರತೆ, ಸಂಪ್ರದಾಯ ಪ್ರಧಾನವಾಗಿರುವುದರಿಂದ ಶಿಲ್ಪಿಗಳು ವಿಶ್ವಬ್ರಾಹ್ಮಣ ವಂಶಸ್ಥರೇ ಈ ಎಲ್ಲ ಕಾಯಕವನ್ನು ಮಾಡುವಂತಹ ಅಧಿಕಾರ ಹೊಂದಿದ್ದರಿಂದ ಶಿಲ್ಪಿಗಳ ನಿಯಂತ್ರಣ ,ಸಮಾಜದ ಕೇಂದ್ರ ಬಿಂದುವಾದ ಆನೆಗುಂದಿ ಮಹಾಸಂಸ್ಥಾನ ಸರಸ್ವತಿ ಪೀಠದ ,ಜಗದ್ಗುರುಗಳ ಅನುಜ್ಞೆ ಯಂತೆ ನಡೆದು ಕೊಳ್ಳುತ್ತಿದ್ದರು . ಆನೆಗುಂದಿ ಮಹಾಸಂಸ್ಥಾನ ಸರಸ್ವತಿ ಪೀಠವು , ಆನೆಗುಂದಿ ಮಹಾಸಂಸ್ಥಾನದ ಮಹಾರಾಜರುಗಳ ಗುರುಪೀಠವು ಆಗಿರುವುದರಿಂದ ,ಮಹಾರಾಜರ ರಾಜಾಶ್ರಯ ಹಾಗು ಸಮಸ್ತ ಸಮಾಜದ ಸಹಕಾರವು ಹೊಂದಿ ಅತ್ಯಂತ ಶ್ರೇಷ್ಠ ಮತ್ತು ಉತ್ತುಂಗ ಸ್ಥಿತಿಯಲ್ಲಿ ಇತ್ತು ಎನ್ನುವುದಕ್ಕೆ ಅಲ್ಲಿ ಇರುವ ಕುರುಹುಗಳು ಶಾಸನಗಳು ಸಾಕ್ಷಿಯಾಗಿ ಈಗಲೂ ಉಳಿದು ಕೊಂಡಿದೆ .

ಕ್ರಮೇಣ ರಕ್ಕಸ ತಂಗಡಿ ಯುದ್ಧದ ನಂತರ ಮುಸಲ್ಮಾನರ ದಾಳಿಗೆ ಒಳಪಟ್ಟು ವಿಜಯ ನಗರ ಸಾಮ್ರಾಜ್ಯ ಪತನ ಗೊಂಡಿದ್ದು , ಮಹಾರಾಜರ ರಾಜಾಶ್ರಯ ,ಸರ್ವಸಮಾಜದ ಸಹಕಾರ ಸಂಪೂರ್ಣ ಕಳೆದು ಕೊಂಡ ಗುರು ಪೀಠದ ಜಗದ್ಗುರುಗಳು , ಹಾಗು ಸ್ವಾಮೀಜಿಗಳ ಪರಿವಾರ , ಪರಿಚಾರಕರು , ಕೈಗೆ ಸಿಕ್ಕಿದ ವಸ್ತು – ಸಲಕರಣೆ-ಧನ ಸಾಹಿತ್ಯ ಸಂಪತ್ತನ್ನು ಹಿಡಿದುಕೊಂಡು ಪ್ರಾಣಭಯದಿಂದ ಬೇರೆ ಬೇರೆ ಪ್ರದೇಶಗಳಿಗೆ ತೆರಳಿ ಜನ ಸಾಮಾನ್ಯರಂತೆ ಜೀವನ ನಿರ್ವಹಿಸಬೇಕಾದ ಅನಿವಾರ್ಯತೆ ಒದಗಿ ಬಂತು . ಆನೆಗುಂದಿಯಿಂದ ದೇಶಾಂತರಕ್ಕೆ ತೆರಳಿದ ಗುರುಪೀಠದಲ್ಲಿದ್ದ ಸ್ವಾಮೀಜಿಗಳು ನಾಲ್ಕು ವಿವಿಧ ಕಡೆ ಚದುರಿ ಹೋದರು . ಅದರಲ್ಲಿ ಕೆಲವು ಸ್ವಾಮೀಜಿಗಳು ಈಗಿನ ಶಿವಮೊಗ್ಗ ಜಿಲ್ಲೆಯ ಬೆಳಗುತ್ತಿ ಪ್ರದೇಶದಲ್ಲಿ ಸರಸ್ವತಿ ಪೀಠವನ್ನು ಸ್ಥಾಪಿಸಿ ಶಿಷ್ಯ ಸಮೂಹವನ್ನು ಅನುಗ್ರಹಿಸುವ ಕಾರ್ಯದಲ್ಲಿ ನಿರತರಾದರು .
ಸುಮಾರು ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಬೆಳಗುತ್ತಿ ಮಠದ ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನೀಲಕಂಠ ಸರಸ್ವತಿ ಮಹಾಸ್ವಾಮೀಜಿಗಳವರು ತನ್ನ ದಿವ್ಯ ವರ್ಚಸ್ಸಿನಿಂದ ಶ್ರೀಮಠಕ್ಕೆ ಹೊಸ ಚೈತನ್ಯ ,ಮಾನ್ಯತೆ ದೊರಕಿಸಿಕೊಟ್ಟರು . ಆ ಕಾಲದಲ್ಲಿ ಮಿಕ್ಕ ಗುರು ಪೀಠಗಳ ಸ್ವಾಮೀಜಿಗಳು ಸನ್ಯಾಸದಿಂದ ಗೃಹಸ್ಥ ಆಶ್ರಮಕ್ಕೆ ಬದಲಾಗುತಿದ್ದರೂ ಕೂಡ ಬೆಳಗುತ್ತಿ ಮಠವು ತನ್ನ ಪೂರ್ವಯತಿ ಪರಂಪರೆಯನ್ನು ಉಳಿಸಿಕೊಂಡಿತ್ತು .ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನೀಲಕಂಠ ಸರಸ್ವತಿ ಮಹಾಸ್ವಾಮೀಜಿಯವರ ಬಳಿಕ ಬೆಳಗುತ್ತಿ ಮಠಕ್ಕೆ ನಿಮುಕ್ತಿಗೊಂಡ ನಿಕಟ ಪೂರ್ವ ಯತಿ ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾಸ್ವಾಮೀಜಿಗಳವರು ಸನ್ಯಾಸ ದೀಕ್ಷೆ ಹೊಂದಿದ್ದು ಅವರು ವಿರಕ್ತ ಪರಮ ಹಂಸ ಯೋಗಿ , ಮಹಾ ತಪಸ್ವಿಗಳು , ವೇಧ ವೇಧಾಂತ ಪಂಡಿತ , ಮೇಧಾವಿ , ಪೂರ್ಣ ವಾಗ್ಮಿಗಳು, ಪವಾಡ ಪುರುಷರು ಆಗಿದ್ದರು. ಇಂತಹ ಸ್ವಾಮೀಜಿಯವರು ತನ್ನ ಕಾರ್ಯ ಕ್ಷೇತ್ರವನ್ನು ವಿಸ್ತಾರ ಮಾಡಿಕೊಂಡು ಸಹ್ಯಾದ್ರಿಯ ಪಶ್ಚಿಮ ತಟದ ಕರಾವಳಿ ಪ್ರದೇಶಗಳಿಗೆ ಆಗಾಗ್ಗೆ ಭೇಟಿ ನೀಡಿ ಕರಾವಳಿಯಲ್ಲಿ ನೆಲೆನಿಂತಿದ್ದ ವಿಶ್ವಬ್ರಾಹ್ಮಣ ಸಮುದಾಯದವರ ಪ್ರೀತಿ -ವಿಶ್ವಾಸ- ಗೌರವಗಳಿಗೆ ಪಾತ್ರರಾದರು . ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾ ಸ್ವಾಮೀಜಿಯವರು ದಕ್ಷಿಣದ ಮಧೂರಿನಿಂದ ಉತ್ತರದ ಗೋಕರ್ಣ ದವರೆಗೂ ಸಂಚರಿಸಿ ಅನೇಕ ದೇವಸ್ಥಾನ ಸ್ಥಾಪನೆ , ಪುನಃ

ಪ್ರತಿಷ್ಠ ಗಳನ್ನೂ , ಹಾಗು ಸಮಾಜದ ಸಂಘಟನೆ , ಧರ್ಮ ಪ್ರಚಾರಮಾಡಿದರೆಂದು ಈ ಸಂದರ್ಭದಲ್ಲಿ ಅನೇಕ ಪವಾಡಗಳು ಆಗಿರುವ ಮಾಹಿತಿಗಳು ಈಗಲೂ ಲಭ್ಯ ಇವೆ .

1892 ರಲ್ಲಿ ಶ್ರೀಗಳವರು ಉಡುಪಿ-ಕಟಪಾಡಿಯಲ್ಲಿ ಚಾತುರ್ಮಾಸ್ಯ ವ್ರತಾಚರಣೆ ನಿರತರಾಗಿದ್ದು, ಅಂತಯೇ ಕಟಪಾಡಿ ವೇಣುಗಿರಿಯಲ್ಲಿ ನಿರ್ಮಿಸಿದ ಶ್ರೀ ಕಾಳಿಕಾಂಬಾ ವಿಶ್ವಕರ್ಮೇಶ್ವರ ದೇವಸ್ಥಾನದ ಪ್ರತಿಷ್ಠಾಪನೆಯು ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾಸ್ವಾಮೀಜಿಯವರ ದಿವ್ಯ ಅಮೃತ ಹಸ್ತದಿಂದ ನೆರವೇರಿಸಿದರು .1905 ರಲ್ಲಿ ಕಾರ್ತಿಕ ಬಹುಳ ಅಷ್ಟಮಿಯ ಪುಣ್ಯ ದಿನದಂದು ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾ ಸ್ವಾಮೀಜಿಯವರು ಕಟಪಾಡಿಯ ವೇಣುಗೀರಿಯಲ್ಲಿ ಬ್ರಹ್ಮಐಕ್ಯರಾದರು . ಅವರ ವೃಂದಾವನವು ಕಟಪಾಡಿ ವೇಣುಗಿರಿ ಶ್ರೀ ಕಾಳಿಕಾಂಬಾ ವಿಶ್ವಕರ್ಮೇಶ್ವರ ದೇವಸ್ಥಾನದ ಹೊರ ಸುತ್ತಿನ ಈಶಾನ್ಯ ಭಾಗದಲ್ಲಿ ನಿರ್ಮಿಸಲ್ಪಟ್ಟಿದೆ. ಅವರು ಬ್ರಹ್ಮಐಕ್ಯರಾಗುವ ಮುನ್ನ ತಮ್ಮ ಶಿಷ್ಯರ ಬಳಿ ,ಮುಂದೆ ಈ ಪೀಠಕ್ಕೆ ನೂರು ವರ್ಷಗಳ ಕಾಲ ಪೀಠಾರೋಹಣ ಹಾಗು ನಿಮಗೆಲ್ಲ ಆಶೀರ್ವಾದ ಮಂತ್ರಾಕ್ಷತೆ ಪ್ರಾಪ್ತಿ ಆಗಲ್ಲ ಅಂದಿದ್ದರಂತೆ .ಹೀಗೆ ಜಗದ್ಗುರುಗಳ ಅಕಾಲಿಕ ಅಗಲಿಕೆಯಿಂದ ಕರ್ನಾಟಕ ಕರಾವಳಿಯ ವಿಶ್ವ ಬ್ರಾಹ್ಮಣ ಸಮಾಜಕ್ಕೆ ದಿಕ್ಕಿಲ್ಲದಂತಾಯಿತು .

ಅವರ ವಾಣಿಯಂತೆ ,ಹತ್ತು ಹಲವು ಕಾರಣಗಳಿಂದ ಸುಮಾರು ಹತ್ತು ದಶಕಗಳ ಕಾಲ ಪೀಠಕ್ಕೆ ಶಿಷ್ಯ ಸ್ವೀಕಾರ ಸಾಧ್ಯವಾಗಲಿಲ್ಲ . ಬೆಳಗುತ್ತಿ ಮಠ ಸಂಪೂರ್ಣ ಬರಿದಾಯಿತು . ಶ್ರೀ ಮಠದ ಆಸ್ತಿ ,ಅತ್ಯಂತ ಶ್ರೇಷ್ಠ ಮಟ್ಟದ ಸಾಹಿತ್ಯ ಸಂಪತ್ತು ,ಪರಾಧೀನವಾದುದರಲ್ಲಿ ಆಶ್ಚರ್ಯವಿಲ್ಲ .ಅತ್ಯಂತ ಕೆಟ್ಟ ಪರಿಸ್ಥಿತಿ ಬೆಳಗುತ್ತಿ ಮಠಕ್ಕೆ ಒದಗಿಬಂತು . ಈಗಲೂ ಬೆಳಗುತ್ತಿ ಮಠ ಪರಂಪರೆಯ ಕೆಲವು ಸ್ವಾಮೀಜಿಗಳವರ ಸಮಾದಿಗಳು ಶಿಕಾರಿಪುರದ ಹತ್ತಿರ ಹೊತನಕಟ್ಟೆಯಲ್ಲಿದೆ . ನಂತರದ ದಿನಗಳಲ್ಲಿ ಬೆಳಗುತ್ತಿ ಮಠದ ಪುನರುತ್ಥಾನದ ಪ್ರಯತ್ನವನ್ನು ಕರ್ನಾಟಕದ ಕರಾವಳಿಯ ವಿಶ್ವಬ್ರಾಹ್ಮಣ ಸಮಾಜದವರು ಮಾಡುತ್ತಲೇ ಇದ್ದರು. ಕುಲ ಗುರು ವಿಲ್ಲದ ಸಮಾಜಕ್ಕೆ ಕುಲ ಗುರುಗಳ ಪೂರ್ಣತೆಗಾಗಿ ಹಲವು ಪ್ರಯತ್ನಗಳು ನಡೆಯುತ್ತಲೇ ಇದ್ದವು , ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾ ಸ್ವಾಮೀಜಿಗಳವರ ಪೂರ್ವಾಶ್ರಮ ಸಹೋದರ ಧರ್ಮೇಂದ್ರ ಸ್ವಾಮೀಜಿಯವರ ಪರಂಪರೆಯಲ್ಲಿ ಬಂದ ಶ್ರೀ ಗುರುನಾಥ ಸ್ವಾಮಿ ಹಾಗು ಶ್ರೀಮತಿ ಸರಳಮ್ಮನವರ ದ್ವಿತೀಯ ಪುತ್ರ ಪೂರ್ವಾಶ್ರಮದ ಹೆಸರು “ಶ್ರೀ ಕಾಳಹಸ್ತಿ ” ಸ್ವಾಮೀಜಿಯವರನ್ನು ಬೆಳಗುತ್ತಿ ಮಠವು ಪುನರುತ್ಥಾನ ಗೊಳಿಸಿದ ಬಳಿಕ ನಿಮುಕ್ತಿಗೊಳಿಸಲು ನಿರ್ಧರಿಸಲಾಯಿತು .

ಸುಮಾರು 100 ವರ್ಷಗಳ ನಂತರ ಬೆಳಗುತ್ತಿ ಮಠ ಪುನಃ ನಿರ್ಮಾಣ ಯೋಜನಾ ಸಮಿತಿ ಅಸ್ತಿತ್ವಕ್ಕೆ ಬಂತು . ಭಾವಿ ಪೀಠಾಧಿಪತಿಯವರ ಹೆಚ್ಚಿನ ವಿದ್ಯಾಭ್ಯಾಸಕ್ಕೆ ವ್ಯವಸ್ಥೆಯನ್ನು ಮಾಡಲಾಯಿತು .ಶ್ರೀ ಕಾಳಹಸ್ತಿ ಸ್ವಾಮೀಜಿಯವರು ಮೈಸೂರಿನಲ್ಲಿ ತನ್ನ ಅದ್ವೈತ ವೇಧಾಂತ ವಿದ್ವತ್ತನ್ನು ಪೂರ್ಣಗೊಳಿಸಿ ಸಂಸ್ಕೃತ ಹಾಗು ಹಿಂದಿ ಬಾಷೆಗಳಲ್ಲಿ ಸ್ನಾತ ಕೋತರ ಪದವಿ ಪಡೆದರು .ಅದರೊಟ್ಟಿಗೆ ಕರಾವಳಿ ಭಾಗದ ಹದಿನೈದು ದೇವಸ್ಥಾನಗಳಲ್ಲಿ ಗುರುಕಾಣಿಕೆ ಸಂಗ್ರಹಕ್ಕೆ ಪ್ರಯತ್ನಗಳು ನಡೆದವು . ಕಟಪಾಡಿ ದೇವಸ್ಥಾನದ ಪಕ್ಕ ಗುರುಧ್ಯಾನ ಮಂದಿರ ನಿರ್ಮಾಣವಾಯಿತು.

ದಿನಾಂಕ 17.2.2005 ರಂದು ಶ್ರೀ ಕಾಳಹಸ್ತಿ ಸ್ವಾಮೀಜಿಯವರು ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ನಾಗಧರ್ಮೇಂದ್ರ ಸರಸ್ವತಿ ಮಹಾ ಸ್ವಾಮೀಜಿಗಳವರ ವೃಂದಾವನದಲ್ಲಿ (ಕಟಪಾಡಿ ವೇಣುಗಿರಿ ಶ್ರೀ ಕಾಳಿಕಾಂಬಾ ವಿಶ್ವಕರ್ಮೇಶ್ವರ ದೇವಸ್ಥಾನದ ಹೊರ ಸುತ್ತಿನ ಈಶಾನ್ಯ ಭಾಗದಲ್ಲಿ) ಆತುರ ಸನ್ಯಾಸ ವಿಧಿ ಪ್ರಕಾರ " ಸ್ವಯಂ ದೀಕ್ಷೆ "" ಪಡೆದು ,ಮೊದಲಿಗೆ ಪರಮ ಪೂಜ್ಯನೀಯ ಅಷ್ಟೋತ್ತರ ಶತಶ್ರೀ ಕಾಳಹಸ್ತೇಂದ್ರ ಸರಸ್ವತೀ ಮಹಾಸ್ವಾಮೀಜಿ ಎಂಬ ನಾಮಾಂಕಿತ ಧರಿಸಿ ಕಟಪಾಡಿಯಲ್ಲಿ ಮೊಕ್ಕಾಂ ಹೂಡಿದರು.ತಮ್ಮ

ಮುಖದಲ್ಲಿ ದಿವ್ಯ ತೇಜಸ್ಸು ,ಮೃದುಸ್ವಭಾವ ,ಹೊಂದಿರುವ ಪರಮ ಪೂಜ್ಯನೀಯ ಅಷ್ಟೋತ್ತರ ಶತಶ್ರೀ ಕಾಳಹಸ್ತೇಂದ್ರ ಸರಸ್ವತಿ ಸ್ವಾಮೀಜಿಯವರು ನಾಡಿನ ಸಮಸ್ತ ಬಾಂಧವರಿಗೆ ಕಣ್ಣಿಗೆ ಗೋಚರಿಸುವ ದೇವರಾದರು .ಯಾವುದೇ ಕಾರಣಕ್ಕೂ " ಸನ್ಯಾಸಿಗಳನ್ನು ಜಾತಿ -ಮತ-ಪಂಥ -ಪಂಗಡ -ಪ್ರದೇಶಗಳಿಗೆ ಸೀಮಿತಗೊಳಿಸಬಾರದೆಂಬ ಉದಾತ್ತ ಧ್ಯೇಯ" ಪೂಜ್ಯ ಶ್ರೀಗಳವರದ್ದು ಆಗಿತ್ತು .ದಿನಾಂಕ 7.6.2010 ರಂದು ಇತಿಹಾಸ ಪ್ರಸಿದ್ಧ ಶ್ರೀ ಜಗದ್ಗುರು ಶಂಕರಾಚಾರ್ಯ ದಕ್ಷಿಣಾಮ್ನಾಯ ಶೃಂಗೇರಿ ಶಾರದಾ ಪೀಠಾದೀಶ್ವರ ಜಗದ್ಗುರು ಶ್ರೀ ಶ್ರೀ ಶ್ರೀ ಭಾರತಿ ತೀರ್ಥ ಮಹಾಸ್ವಾಮೀಜಿಯವರು ,ಪರಮ ಪೂಜ್ಯನೀಯ ಅಷ್ಟೋತ್ತರ ಶತಶ್ರೀ ಕಾಳಹಸ್ತೇಂದ್ರ ಸರಸ್ವತಿ ಸ್ವಾಮೀಜಿಯವರ ಅತೀ ವಿಜೃಂಭಣೆಯ ಪಟ್ಟಾಭಿಷೇಕ ಮಹೋತ್ಸವವನ್ನು ಅವರ ದಿವ್ಯ ಅಮೃತ ಹಸ್ತಗಳಿಂದ ನೆರವೇರಿಸಿದರು .ನಂತರದಲ್ಲಿ ಅಪಾರ ಶಿಷ್ಯ ಸಮೂಹದ ನಡುವೆ ಪಟ್ಟಾಭಿಷೇಕ ಗೊಂಡಂತಹ ಪರಮ ಪೂಜ್ಯನೀಯ ಅಷ್ಟೋತ್ತರ ಶತಶ್ರೀ ಕಾಳಹಸ್ತೇಂದ್ರ ಸರಸ್ವತಿ ಸ್ವಾಮೀಜಿಯವರ ನಾಮದೇಯವನ್ನು ಪರಮ ಪೂಜ್ಯ ಜಗದ್ಗುರು ಅನಂತಶ್ರೀ ವಿಭೂಷಿತ ಕಾಳಹಸ್ತೇಂದ್ರ ಸರಸ್ವತಿ ಮಹಾಸ್ವಾಮೀಜಿಗಳವರೆಂದು ಶ್ರೀ ಜಗದ್ಗುರು ಶಂಕರಾಚಾರ್ಯ ದಕ್ಷಿಣಾಮ್ನಾಯ ಶೃಂಗೇರಿ ಶಾರದಾ ಪೀಠಾದೀಶ್ವರ ಜಗದ್ಗುರು ಶ್ರೀ ಶ್ರೀ ಶ್ರೀ ಭಾರತಿ ತೀರ್ಥ ಮಹಾಸ್ವಾಮೀಜಿಯವರಿಂದ ಘೋಷಿಸಲ್ಪಡುತ್ತಾರೆ.ಅಂದಿನಿಂದ ವಿಶ್ವಬ್ರಾಹ್ಮಣ ಸಮಾಜದ ಸರಸ್ವತಿ ಪೀಠಕ್ಕೆಹಲವು ಶತಮಾನಗಳಿಂದ ಜಗದ್ಗುರುಗಳು ಆಯ್ಕೆಯಾಗದೆ ಬರಿದಾಗಿದ್ದ ಸಂದರ್ಭ ಆನೆಗುಂದಿ ಮಹಾಸಂಸ್ಥಾನ ಸರಸ್ವತಿ ಪೀಠಕ್ಕೆ ಜಗದ್ಗುರುಗಳು ಪ್ರಾಪ್ತರಾದರು .ನಂತರ ಸಮಸ್ತ ಶಿಷ್ಯರಿಂದ ಗುರುಗಳಿಗೆ ಕಟಪಾಡಿಯಲ್ಲಿ ಸುಂದರ ಸುಸಜ್ಜಿತ ಧ್ಯಾನ ಮಂದಿರ , ವಿಶಾಲ ಮಠ ನಿರ್ಮಾಣವಾಗುತ್ತದೆ .ವೇದ ಪಾಠ ಶಾಲೆ ಆರಂಭವಾಗುತ್ತದೆ .ಗುರುಗಳು ತಮ್ಮ ಸ್ವಂತ ಖರ್ಚಿನಿಂದ ಕರ್ನಾಟಕದ ಬೇರೆ ಬೇರೆ ಭಾಗದ ಸಮಾಜ ಭಾಂದವರ ಅರ್ಹ ಬಡ ಕುಟುಂಬದ ಮಕ್ಕಳಿಗೆ ಪ್ರಾಥಮಿಕ ಹಾಗು ಪ್ರೌಢ ಶಿಕ್ಷಣ ದೊಂದಿಗೆ ಊಟ ವಸತಿಯನ್ನು ಸಂಪೂರ್ಣ ಉಚಿತವಾಗಿ ಕೊಡಿಸಲು ಪ್ರಾರಂಭ ಮಾಡುತ್ತಾರೆ .ಮಠದ ಶ್ರೀ ನಾಗದರ್ಮೇಂದ್ರ ಸ್ವಾಮಿ ಸಂಸ್ಕೃತ ವೇದ ಸಂಜೀವಿನಿ ಪಾಠಶಾಲೆಯಲ್ಲಿ ದಿನದ ಎಲ್ಲ ಹೊತ್ತು ,ವೇದ ವಿದ್ವತ್ ಪಾಠ-ಪಾರಾಯಣ-ಆಗಮ ಶಾಸ್ತ್ರ-ಸಂಸ್ಕೃತ -ಯೋಗ-ಗಾಯನ -ವಾಸ್ತುಶಾಸ್ತ್ರ ಇತ್ಯಾದಿಗಳು ಸಮಗ್ರವಾಗಿ ಐದು ವರುಷಗಳ ಕಾಲ ಹೇಳಿ ಕೊಡಲಾಗುತ್ತದೆ .ಇಲ್ಲಿ ಕಲಿತ ಶಿಷ್ಯ ವೈದಿಕ ವಿದ್ವತ್ ತಂತ್ರಿವರಿಯರನ್ನ ಕರ್ನಾಟಕ ಮಾತ್ರವಲ್ಲದೆ ಹೊರ ರಾಜ್ಯದಲ್ಲಿ ಇರುವ ವಿಶ್ವಕರ್ಮ ಕಾಳಿಕಾಂಬಾ ದೇವಾಲಯಗಳಿಗೆ ನಿಯೋಜನೆ ಮಾಡಿ ಧರ್ಮ ಪ್ರಚಾರ ಮತ್ತು ಧರ್ಮ ಸಂಘಟನೆ ಮಾಡುವ ಸದುದ್ದೇಶ ಶ್ರೀಗಳವರದ್ದು ಆಗಿದೆ .ಇದರಿಂದ ಸಮಾಜದ ಏಳಿಗೆ ಹಾಗು ಅಭಿವೃದ್ದಿಯು ಸಮಾಜದ ಕಟ್ಟಕಡೆಯ ವ್ಯಕ್ತಿಗೂ ತಲುಪಿಸಲಾಗುತ್ತದೆ. ಉಡುಪಿ ಜಿಲ್ಲೆಯ ಪಡುಕುತ್ಯರು ಎಂಬಲ್ಲಿ ಸುಮಾರು 10.5 ಎಕ್ಕರೆ ವಿಶಾಲ ನಿವೇಶನವನ್ನು ಖರೀದಿಸಿ ಅದರಲ್ಲಿ ಆನೆಗುಂದಿ ಶ್ರೀ ಸರಸ್ವತಿ ಎಜುಕೇಷನಲ್ ಟ್ರಸ್ಟ್ ಎನ್ನುವ ವಿದ್ಯಾ ಸಂಸ್ಥೆ .ಸಾಂಪ್ರದಾಯಕ ಶಿಲ್ಪಿಗಳ ಶಿಲ್ಪಿ ಕೇಂದ್ರ ,ಗೋಶಾಲೆ ,ಸಭಾಭವನ,ಅತ್ಯಾಧುನಿಕ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ , ವಿದ್ಯಾರ್ಥಿ ನಿಲಯ ,ಯಾತ್ರಿ ನಿಲಯ ಪಟ್ಟದ ದೇವರಾದ ಚಂದ್ರ ಮೌಳೇಶ್ವರ ದೇವಸ್ಥಾನ ಇತ್ಯಾದಿ .ಹೀಗೆ ಹತ್ತು ಹಲವು ಕಾರ್ಯಕ್ರಮ ಹಮ್ಮಿಕೊಳ್ಳಲು ಪೂಜ್ಯ ಜಗದ್ಗುರುಗಳು ಕಾರ್ಯ ನಿರತರಾಗಿದ್ದಾರೆ . ಇದಕ್ಕೆ ಪ್ರತಿಷ್ಠಾನದ ಹಾಗು ಸಮಾಜ ಭಾಂದವರ ಸಂಪೂರ್ಣ ಸಹಕಾರವು ಲಬಿಸಿ ದೂರದ ವಿಶ್ವಬ್ರಾಹ್ಮಣ ಮೂಲ ಪೀಠ ಕೊಪ್ಪಳ ಜಿಲ್ಲಾ ಗಂಗಾವತಿ ತಾಲೂಕಿನ ಹಂಪಿ ಆನೆಗುಂದಿಯ ಪಂಪ ಸರೋವರ ಬಳಿ ಒಂದೂವರೆ ಎಕ್ಕರೆ ನಿವೇಶನ ಖರೀದಿಸಿ ಮಠ ಸ್ಥಾಪಿಸಿ ಅಲ್ಲಿ ದೇವಸ್ಥಾನ ಹಾಗು ಮಕ್ಕಳಿಗೆ ವೇದಶಿಬಿರ ನಡೆಸುವುದು . ಬೆಟ್ಟದ ಮೇಲೆ ಪಾಲು ಬಿದ್ದ 2400 ವರ್ಷ ಪುರಾತನ ದೇವಾಲಯದ ಜೀರ್ಣೋದ್ದಾರ ಕೆಲಸಕಾರ್ಯಗಳಗೊಂಡಂತ್ತೆ ನಿರಂತರ ಪೂಜಾ ಕೈಕರ್ಯಗಳು ನಡೆಯುವ ಹಾಗೆ ಅನೇಕ ಸಮಾಜಮುಖಿ ಸೇವೆ ನೀಡುತ್ತಿರುವುದು ಸಂತೋಷದಾಯಕ ವಿಷಯ . ಹುಬ್ಬಳ್ಳಿ ,ಮುಂಬೈ

,ಬೆಂಗಳೂರಿನಲ್ಲಿ ಆನೆಗುಂದಿ ಮಹಾಸಂಸ್ಥಾನದ ಶಾಖ ಮಠವು ಪ್ರಾರಂಭಗೊಂಡಿದ್ದು ಇತರ ಪ್ರದೇಶಗಳಲ್ಲಿಯೂ ಕೂಡ ಶಾಖ ಮಠ ಪ್ರಾರಂಭ ಗೊಳ್ಳಬೇಕಿದೆ . ಇದು ಶಿಷ್ಯ ವೃಂದದವರ ಕನಸು ಹಾಗು ಬೇಡಿಕೆಯಾಗಿದೆ ಹೀಗೆ ಸದಾ ಸಮಾಜದ ಅಭಿವೃದ್ದಿ ಎನ್ನುವ ಕನಸನ್ನು ಕಟ್ಟಿಕೊಂಡು ,ಒಂದು ದಿನವೂ ಬಿಡುವುವಿಲ್ಲದೆ ಧರ್ಮದ ಚಿಂತನೆ ಮತ್ತು ಧರ್ಮದ ಪ್ರಚಾರ ಕಾರ್ಯವನ್ನು ನಿರ್ವಹಿಸುತ್ತಿರುವ ಗುರುಗಳು ನಮ್ಮ ಅವಧಿಗೆ ನಾವು ಅವರ ಸೇವೆ ಮಾಡವ ಅವಕಾಶ ದೊರಕಿರುವುದು ನಮ್ಮ ನಿಮ್ಮೆಲ್ಲರ ಸ್ವಭಾಗ್ಯವೇ ಸರಿ .

ಪರಮ ಪೂಜ್ಯ ಜಗದ್ಗುರುಗಳು ಉನ್ನತ ಶಿಕ್ಷಣದ ಹಿನ್ನಲೆಯಿಂದ ಬಂದವರು ಆದುದರಿಂದ ಸ್ವಇಚ್ಛೆಯಿಂದ ಸಮಸ್ತ ವಿಶ್ವಬ್ರಾಹ್ಮಣ ಕುಲ ಭಾಂದವರನ್ನು ಅನುಗ್ರಹಿಸಲು ಸ್ವಯಂ ಸನ್ಯಾಸ ದೀಕ್ಷೆ ಸ್ವೀಕರಿಸಿರುವುದು , ಸಮಾಜಕ್ಕೆ ಅತ್ಯಂತ ಹೆಮ್ಮೆಯ ವಿಚಾರ . ಹೀಗೆಯೇ ಸಹಸ್ರ ವರ್ಷ ಪರಿಯಂತ ಶ್ರೀ ಮತ್ ಆನೆಗುಂದಿ ಮಹಾ ಸಂಸ್ಥಾನ ಸರಸ್ವತಿ ಪೀಠದ ಪರಂಪರೆಯ ಮೂಲಕ ಇಡೀ ವಿಶ್ವ ಬ್ರಾಹ್ಮಣ ಸಮಾಜಕ್ಕೆ ದಾರಿ ದೀಪವಾಗಲಿ ಎಂದು ಸಮಸ್ತ ವಿಶ್ವಬ್ರಾಹ್ಮಣ ಸಮಾಜಭಾಂದವರ ಪರವಾಗಿ ಗುರು ಸನ್ನಿಧಾನದಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತೇನೆ ..

“ ಪ್ರೀತಿಯ ಸಮಾಜ ಭಾಂದವರೇ ಅತಿ ಪುರಾತನವಾದ ವಿಶ್ವಬ್ರಾಹ್ಮಣ ಕುಲ ಗುರು ಪೀಠವಾದ ಆನೆಗುಂದಿ ಮಹಾಸಂಸ್ಥಾನ ಸರಸ್ವತಿ ಪೀಠಕ್ಕೆ ಭೇಟಿಯನ್ನು ನೀಡಿ ನಿಮ್ಮ ಮಕ್ಕಳಿಗೂ ಸಮಾಜದ ಇತಿಹಾಸವನ್ನು ತಿಳಿಸುವಲ್ಲಿ ತಮ್ಮೆಲ್ಲರ ಸಹಕಾರವನ್ನು ನಾವು ಅಪೇಕ್ಷಿಸುತ್ತೇವೆ ”

**ಲೇಖಕರು : ✍ ಪ್ರಚಾರಕರು ; ಗುರು ಸೇವಾ ಪರಿಷತ್ ಬೆಂಗಳೂರು**

